ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ವಾರ್ತಾಪತ್ರ

(ತ್ರೈಮಾಸಿಕ ಪತ್ರಿಕೆ)




ಸಂಪುಟ : ೧೧ ಸಂಚಿಕೆ : ೨ (ಸದಸ್ಯರಿಗೆ ಮಾತ್ರ)

ಏಪ್ರಿಲ್-ಜೂನ್ ೨೦೦೭

ಸಂಪಾದಕರು
ಎಸ್.ವಿ. ಶ್ರೀನಿವಾಸರಾವ್



ಪರಿವಿಡಿ



ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭

ಶಾಖೆ
ಬಿ.ಎಂ.ಶ್ರೀ. ಶತಮಾನೋತ್ಸವ ಭವನ
ಬೆಳ್ಳೂರು, ನಾಗಮಂಗಲ ತಾ॥
ಮಂಡ್ಯ ಜಿಲ್ಲೆ



'ರಾಷ್ಟ್ರಕವಿ' ನಾಡೋಜ ಡಾ. ಜಿ.ಎಸ್. ಶಿವರುದ್ರಪ್ಪ ಅವರ ಜನ್ಮದಿನದಂದು ಅವರ ಸ್ವಗೃಹದಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಕೆಲ ಸದಸ್ಯರು ಶುಭಾಶಯಗಳು ಕೋರಿದರು

## ಕೆಳದಿ ರಾಜರ ಐತಿಹಾಸಿಕ ಹಸ್ತಪ್ರತಿ ಲಭ್ಯ



ಶಿವಮೊಗ್ಗ ಜಿಲ್ಲೆಯ ಕೆಳದಿ ಹಸ್ತಪ್ರತಿ ಸಂಪನ್ಮೂಲ ಕೇಂದ್ರ ಸರ್ವೇಕ್ಷಣೆ ನಡೆಸಿದ ಸಂದರ್ಭದಲ್ಲಿ ಲಭಿಸಿರುವ ಲಿಪಿಗಳುಳ್ಳ ಶ್ರೀ ಆಂಜನೇಯಸ್ವಾಮಿ ಚಿತ್ರಪಟ.

ಕೆಳದಿ ಇತಿಹಾಸ ಜಪಾನ್ ಭಾಷೆಯಲ್ಲಿಯೂ ಸಹ ಪ್ರಕಟವಾಗಿದೆ. ಶಿವಮೊಗ್ಗ ಜಿಲ್ಲೆಯ ಕೆಳದಿ ಇತಿಹಾಸೋತ್ತರ ಕಾಲದ ಓಲೆಗರಿ ಹಸ್ತಪ್ರತಿಯೊಂದು ಸಿಕ್ಕಿದ್ದು, ಇದರ ಪರಿಶೀಲನೆ ನಡೆಸಲಾಗುತ್ತಿದೆ. ತಿಗಳಾರಿ ಮತ್ತು ಕನ್ನಡ ಮೋಡಿ ಲಿಪಿ ಹಸ್ತಪ್ರತಿ ಗ್ರಂಥಗಳ ಬಗ್ಗೆ ಆಸಕ್ತರಿಗೆ ತರಬೇತಿ ನೀಡಲಾಗುತ್ತಿದೆ. ಕೇಂದ್ರ ಸರ್ಕಾರವು ಭಾರತದಲ್ಲಿನ ಲಿಪಿಗಳು ಹಾಗೂ ಹಸ್ತಪ್ರತಿಗಳನ್ನು ಕ್ರೋಢೀಕರಿಸಿ ಸರ್ವೇಕ್ಷಣೆ ನಡೆಸಲು ನಿರ್ಧರಿಸಿದೆ. ದೇಶದಲ್ಲಿ ಒಟ್ಟು ಸುಮಾರು ೫.೫೦ ಲಕ್ಷ ಹಸ್ತಪ್ರತಿಗಳಿವೆ. ಕರ್ನಾಟಕದಲ್ಲಿ ಕನ್ನಡ, ತಿಗಳಾರಿ ಮತ್ತಿತರರ ಹಸ್ತಪ್ರತಿಗಳಿದ್ದು, ಇದರಲ್ಲಿ ಕಾವ್ಯ, ಶಾಸ್ತ್ರ, ಗಣಿತ ಸೇರಿದಂತೆ ಇನ್ನಿತರ ಅಂಶಗಳಿವೆ. ಕೆಳದಿಯ ಐತಿಹಾಸಿಕ ದಾಖಲೆಗಳುಳ್ಳ ಅನೇಕ ಓಲೆ ಪ್ರತಿಗಳು ಸಿಕ್ಕಿವೆ. ಹಸ್ತಪ್ರತಿಗಳನ್ನು ಸಂರಕ್ಷಿಸದಿದ್ದರೆ ಇತಿಹಾಸ ಕಣ್ಮರೆಯಾಗುತ್ತದೆ. ಈ ಹಿನ್ನೆಲೆಯಲ್ಲಿ ಕೆಳದಿ ಸಂಪನ್ಮೂಲ ಕೇಂದ್ರವು ವಿಶೇಷ ಕಾರ್ಯಕ್ರಮ ನಡೆಸಲು ಉದ್ದೇಶಿಸಿದೆ ಎಂದು ಇತ್ತೀಚೆಗೆ ಕೆಳದಿ ಗುಂಡಾಜೋಯಿಸ್ ಅವರು ಬಿ.ಎಂ.ಶ್ರೀ. ಪ್ರತಿಷ್ಠಾನದ ಹಸ್ತಪ್ರತಿ ಶಾಸ್ತ್ರ ತರಗತಿ ವಿಶೇಷ ಉಪನ್ಯಾಸದಲ್ಲಿ ಹೇಳಿದರು.

■ ಉದಯವಾಣಿ, ೨೨-೨-೦೭

## ಸಂಪಾದಕೀಯ

**ಸು**ಮಾರು ೨೮ ವರ್ಷಗಳ ಹಿಂದೆ ಪ್ರೊ. ಎಂ.ವಿ. ಸೀತಾರಾಮಯ್ಯ ಅವರಿಂದ ಸ್ಥಾಪಿತವಾದ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ನಿರಂತರವಾಗಿ ಸಾಹಿತ್ಯ, ಸಾಂಸ್ಕೃತಿಕ, ಶೈಕ್ಷಣಿಕ ಕಾರ್ಯಚಟುವಟಿಕೆಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿರುವುದಲ್ಲದೆ ಹಸ್ತಪ್ರತಿಶಾಸ್ತ್ರ ಸಂಶೋಧನೆ, ಸುಗಮ ಸಂಗೀತ, ಪಿಎಚ್.ಡಿ., ಎಂ.ಫಿಲ್. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುವ ವಿಶಿಷ್ಟ ಕಾರ್ಯಕ್ರಮಗಳನ್ನು ಹಾಗೂ ಸುಮಾರು ೩೦ ದತ್ತಿ ನಿಧಿಗಳಿಂದ ಉಪನ್ಯಾಸ / ವಿಚಾರಗೋಷ್ಠಿ / ಕಮ್ಮಟಗಳನ್ನು ನಡೆಸುತ್ತಾ ಸಾಹಿತ್ಯ ಸಂವರ್ಧನ ಕಾರ್ಯದಲ್ಲಿ ನಿರತವಾಗಿದೆ. ಈ ಕಾರ್ಯದಕ್ಷತೆಯನ್ನು ಮೆಚ್ಚಿದ ರಾಜ್ಯ ಸರ್ಕಾರ ನಮ್ಮ ಪ್ರತಿಷ್ಠಾನಕ್ಕೆ ೫ ಲಕ್ಷ ರೂಪಾಯಿಗಳ ವಾರ್ಷಿಕ ಅನುದಾನವನ್ನು ಈ ವರ್ಷ ಬಿಡುಗಡೆ ಮಾಡಿದೆ. ಇದಕ್ಕಾಗಿ ಕರ್ನಾಟಕ ಸರ್ಕಾರವನ್ನು ನಾವು ವಂದನಾಪೂರ್ವಕವಾಗಿ ಅಭಿನಂದಿಸುತ್ತೇವೆ. ಈ ಆರ್ಥಿಕ ಸಹಾಯ ನಮ್ಮ ಪ್ರತಿಷ್ಠಾನದ ನಿರ್ದಿಷ್ಟ ಕಾರ್ಯ ಚಟುವಟಿಕೆಗಳನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗಲು ಸಹಕಾರಿಯಾಗಿದೆ. ಎಂದು ಸಂತಸದಿಂದ ತಿಳಿಸುತ್ತಾ, ನಮ್ಮ ವಾರ್ಷಿಕ ಕಾರ್ಯಕ್ರಮಗಳ ಯಾದಿ ಬಹು ದೊಡ್ಡದಿರುವುದರಿಂದ ಈ ಉದಾರ ಸಹಾಯಧನವನ್ನು ಪ್ರತಿವರ್ಷವೂ ಹೆಚ್ಚಿಸಿಕೊಂಡು ಹೋಗುತ್ತಾ ಉಪಕರಿಸಬೇಕೆಂದು ಸರಕಾರವನ್ನು ವಿನಮ್ರವಾಗಿ ವಿನಂತಿಸಿಕೊಳ್ಳಬಯಸುತ್ತೇವೆ.

ರಾಜ್ಯದ ಗೌರವಾನ್ವಿತ ಮುಖ್ಯಮಂತ್ರಿ ಶ್ರೀ ಹೆಚ್.ಡಿ. ಕುಮಾರಸ್ವಾಮಿ ಮತ್ತು ಉಪಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪ, ಕನ್ನಡ ಮತ್ತು ಸಂಸ್ಕೃತಿ ಇಲಾಖಾ ಮಂತ್ರಿ ಶ್ರೀ ಹೆಚ್.ಎಸ್. ಮಹದೇವ ಪ್ರಸಾದ್ ಅವರಿಗೆ ನಮ್ಮ ವಿಶೇಷ ಗೌರವಪೂರ್ಣ ಕೃತಜ್ಞತೆಗಳು ಹಾಗೂ ಹಾರ್ದಿಕ ಶುಭಾಶಯಗಳು.

**ಎಸ್.ವಿ. ಶ್ರೀನಿವಾಸರಾವ್**

## ಸದಸ್ಯರ ಅನಿಸಿಕೆಗಳು

ಪ್ರಿಯರೇ ನಮಸ್ಕಾರ,

ಬಿ.ಎಂ.ಶ್ರೀ. ಪ್ರತಿಷ್ಠಾನದ ವಾರ್ತಾಪತ್ರ ಚೆನ್ನಾಗಿದೆ. ನಿಜಕ್ಕೂ ಇಂಥದ್ದೊಂದು ಮಾಧ್ಯಮದ ಅವಶ್ಯಕವಿತ್ತು. ಮೂರು ತಿಂಗಳಿಗೊಮ್ಮೆಯಾದರೂ ಪ್ರತಿಷ್ಠಾನದೊಂದಿಗೆ ಸಂಪರ್ಕ ಬರುತ್ತದೆಯಲ್ಲ. ಸಂತೋಷ. ನಿಮ್ಮ ಗಟ್ಟಿ ಹೆಜ್ಜೆಯಲ್ಲಿ ದಿಟ್ಟ ಕಾರ್ಯಗಳು ನೆರವೇರುತ್ತಿವೆ. ಬಿಡದ ಹಿಡಿತ ನಿಮ್ಮದು.

ವಂದನೆಗಳೊಂದಿಗೆ

***ಹಣಮಂತ ತಾಸಗಾಂವಕರ, ಬಾಗಲಕೋಟ***




ಪ್ರೊ. ತ.ಸು. ಶಾಮರಾಯರ ಶತಮಾನೋತ್ಸವ ಕಾರ್ಯಕ್ರಮ
ಸ್ಥಳ : ಬೆಳೆಗೆರೆಯ ಶಾರದಾಮಂದಿರ ವಿದ್ಯಾಸಂಸ್ಥೆಯ ಆವರಣ



ಡಿ.ವಿ.ಜಿ. ಸ್ಮೃತಿ ದತ್ತಿ ಕಾರ್ಯಕ್ರಮ - ದಿನಾಂಕ ೨೦-೩-೦೭
ಸ್ಥಳ : ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿ ಮಹಿಳಾ ಕಾಲೇಜು, ಮಲ್ಲೇಶ್ವರಂ




ದಿನಾಂಕ ೧೩-೫-೦೭ರಂದು ನಡೆದ ಸ್ಪರ್ಧಾ ಕಾರ್ಯಕ್ರಮ

# ಪ್ರತಿಷ್ಠಾನದ ವಾರ್ತೆ

(ಅ) ದತ್ತಿ ಕಾರ್ಯಕ್ರಮಗಳು

೧) ದಿನಾಂಕ ೩-೧-೦೭ : ಬಿ.ಎಂ.ಶ್ರೀ. ದತ್ತಿಯಿಂದ ಜನ್ಮದಿನದ ಅಂಗವಾಗಿ ಬಿ.ಎಂ.ಶ್ರೀ. ಪ್ರತಿಮೆಗೆ ಮಾಲಾರ್ಪಣೆ ಮತ್ತು ಸುವರ್ಣ ಕರ್ನಾಟಕ ವಿಶೇಷ ಯೋಜನೆಯಡಿ 'ಕನ್ನಡ ಜಾಗೃತಿ-ಹಸ್ತಪ್ರತಿ ಪ್ರದರ್ಶನ'ದ ಉದ್ಘಾಟನೆ ಕಾರ್ಯಕ್ರಮ ನಡೆಯಿತು.

ಬಿ.ಎಂ.ಶ್ರೀ. ಪ್ರತಿಮೆಗೆ ಬಿ.ಎಂ.ಶ್ರೀ. ಮರಿಮಗಳಾದ ವಿದ್ಯಾ ವಿಕ್ರಂ ಅವರು ಮಾಲಾರ್ಪಣೆ ಮಾಡಿದರು. ಬಿ.ಎಂ.ಶ್ರೀ. ಕನ್ನಡ ಜಾಗೃತಿ-ಹಸ್ತಪ್ರತಿ ಪ್ರದರ್ಶನದ ಉದ್ಘಾಟನೆಯನ್ನು ಶ್ರೀ ವೆಂ. ಶ್ರೀನಿವಾಸ, ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಇವರು ನೆರವೇರಿಸಿದರು. ಪ್ರೊ|| ಎಲ್.ಎಸ್. ಶೇಷಗಿರಿರಾವ್ ಅವರು ಪ್ರತಿಷ್ಠಾನದಲ್ಲಿರುವ ಬಿ.ಎಂ.ಶ್ರೀ. ಪ್ರತಿಮೆಗಳಿಗೆ ಮಾಲಾರ್ಪಣೆ ಮಾಡಿದರು. ಪ್ರತಿಷ್ಠಾನದ ಗೌರವ ಅಧ್ಯಕ್ಷರಾದ ಜಿ. ನಾರಾಯಣ ಅವರು ಅಧ್ಯಕ್ಷತೆ ವಹಿಸಿದ್ದರು.

೨) ದಿನಾಂಕ ೪-೧-೦೭ : 'ಶಂಬಾ ದತ್ತಿ'ಯ ಅಂಗವಾಗಿ ಕನ್ನಡ ಗೆಳೆಯರ ಬಳಗ ಮತ್ತು ಶಂಬಾ ವಿಚಾರ ವೇದಿಕೆ ಇವರುಗಳ ಸಂಯುಕ್ತಾಶ್ರಯದಲ್ಲಿ ಶಂಬಾ ಅವರ ಜನ್ಮದಿನದ ನೆನಪಿನಲ್ಲಿ 'ಸಂಶೋಧನ ದಿನ' ಕಾರ್ಯಕ್ರಮ ನಡೆಯಿತು. ಶಂಬಾ ಅವರ 'ಎದ್ದೇಳು ಕನ್ನಡಿಗ' ಕೃತಿ ಬಿಡುಗಡೆಯನ್ನು ಪ್ರತಿಷ್ಠಾನದ ಅಧ್ಯಕ್ಷರಾದ ಪ್ರೊ|| ಚಿ. ಶ್ರೀನಿವಾಸರಾಜು ಅವರು ಮಾಡಿದರು. ಡಾ|| ಎಚ್.ಎಸ್. ಗೋಪಾಲರಾವ್ ಅವರು 'ಶಂಬಾ ಮತ್ತು ಕರ್ನಾಟಕ'ದ ಬಗ್ಗೆ ಉಪನ್ಯಾಸ ನೀಡಿದರು. ಇದೇ ಸಂದರ್ಭದಲ್ಲಿ ಬಳಗದ ವತಿಯಿಂದ ೬೦ ತುಂಬಿದ ಗೋಪಾಲರಾವ್ ಅವರಿಗೆ ಸನ್ಮಾನ ಮಾಡಿ ಅವರ ಸಾಧನೆಯ ಬಗ್ಗೆ ಡಾ|| ಆರ್. ಶೇಷಶಾಸ್ತ್ರೀ ಮತ್ತು ಪ್ರೊ|| ಎಸ್.ಎಲ್. ಶ್ರೀನಿವಾಸಮೂರ್ತಿ ಅವರು ಮಾತನಾಡಿದರು.

೩) ದಿನಾಂಕ ೩೦-೩-೦೭ : 'ಡಿ.ವಿ.ಜಿ. ಸ್ಮೃತಿ' ದತ್ತಿ ಉಪನ್ಯಾಸ

ಡಿ.ವಿ.ಜಿ. ಸ್ಮೃತಿ ದತ್ತಿ ಉಪನ್ಯಾಸ ಕಾರ್ಯಕ್ರಮವು ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ ಕಾಲೇಜು ಸಹಯೋಗದಲ್ಲಿ ಕೆ.ಎನ್.ವಿ. ಶಾಸ್ತ್ರೀ ಸಭಾಂಗಣ, ಮಹಾರಾಣಿ ಲಕ್ಷ್ಮಿಅಮ್ಮಣ್ಣಿ ಕಾಲೇಜು ಆವರಣದಲ್ಲಿ ನಡೆಯಿತು. ಕಾರ್ಯಕ್ರಮದ ಉದ್ಘಾಟನೆಯನ್ನು ಹಿರಿಯ ಸಾಹಿತಿ ಶ್ರೀ ನೀಲತ್ತಹಳ್ಳಿ ಕಸ್ತೂರಿ ನೆರವೇರಿಸಿದರು.

ಡಾ|| ಎಚ್.ಎನ್. ಮುರಳೀಧರ ಅವರು 'ಡಿ.ವಿ.ಜಿ. ಅವರ ಸಾಹಿತ್ಯ: ಚಿಂತನೆ ಕೆಲವು ನೋಟಗಳು, ಕುರಿತು ಮಾತನಾಡಿದರು. ಪ್ರಾಂಶುಪಾಲರಾದ ಪ್ರೊ|| ಟಿ.ಎಲ್. ಶಾಂತ ಅವರು ಅಧ್ಯಕ್ಷತೆ ವಹಿಸಿದ್ದರು. ಎಸ್.ವಿ. ಶ್ರೀನಿವಾಸರಾವ್ ಪ್ರಾಸ್ತಾವಿಕ ಭಾಷಣ ಮಾಡಿ ಪ್ರತಿಷ್ಠಾನದ ಚಟುವಟಿಕೆ ಬಗ್ಗೆ ಮಾಹಿತಿ ನೀಡಿದರು.

೪) ದಿನಾಂಕ ೧೩-೫-೦೭ ಅಖಿಲ ಕರ್ನಾಟಕ ಸುಗಮ ಸಂಗೀತ ಸ್ಪರ್ಧೆ ಅಂಗವಾಗಿ ಸುವರ್ಣ ಕರ್ನಾಟಕ ನಾಡು-ನುಡಿ ಗೀತೆ ಸ್ಪರ್ಧೆ, ಬಿ.ಎಂ.ಶ್ರೀ. ಭಾವಗೀತೆ ಸ್ಪರ್ಧೆ, ಪಿ. ಕಾಳಿಂಗರಾವ್ ಜಾನಪದ ಗೀತೆ ಸ್ಪರ್ಧೆ; ಕಾರ್ಯಕ್ರಮಗಳು ಕಾಳಿಂಗರಾಯರ ಬಳಗದ ಸಹಯೋಗದಲ್ಲಿ ನಡೆಯಿತು.

ಸ್ಪರ್ಧೆಗಳನ್ನು ಉದ್ಘಾಟನೆ ಮಾಡಿದ ನಾಡಿನ ಹಿರಿಯ ಚಿಂತಕರೂ ಪ್ರತಿಷ್ಠಾನದ ಗೌರವಾಧ್ಯಕ್ಷರು ಆದ ಶ್ರೀ ಜಿ. ನಾರಾಯಣ ಅವರು ಮೇಲ್ಕಂಡಂತೆ ಅಭಿಪ್ರಾಯಪಟ್ಟರು. ಇಂದು ನಾಡಿನ ಅನೇಕ ಮಕ್ಕಳು ಭಾವಗೀತೆಗಳನ್ನು ಹಾಡುತ್ತಿರುವುದು ಸಂತೋಷದ ವಿಚಾರವಾದರೂ ಅವರಿಗೆ ಬಹಳಷ್ಟು ವೇಳೆ ಅವುಗಳ ಅರ್ಥ, ಬರೆದ ಕವಿ ಗೊತ್ತಿರುವುದಿಲ್ಲ. ಅದನ್ನು ತಿಳಿಸುವಂತಹ ಪ್ರಾತಿನಿಧಿಕ ಪುಸ್ತಕದ ಅಗತ್ಯವಿದೆ. ಇದರಿಂದ ಕಲಿಯುವವರಿಗೆ ಮತ್ತು ಕೇಳುವವರಿಗೆ ಹೆಚ್ಚು ಉಪಯೋಗವಾಗುತ್ತದೆ ಎಂದರು. ಹಿರಿಯ ಸಾಹಿತಿಗಳೂ ಪ್ರತಿಷ್ಠಾನದ ವ್ಯವಸ್ಥಾಪಕ ಕಾರ್ಯದರ್ಶಿಗಳೂ ಆದ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅಧ್ಯಕ್ಷತೆ ವಹಿಸಿದ್ದರು. ಗೌರವ ಕಾರ್ಯದರ್ಶಿ ಪ್ರೊ|| ನಾ. ಗೀತಾಚಾರ್ಯ ಪ್ರತಿಷ್ಠಾನದ ಮತ್ತು ಸ್ಪರ್ಧೆಗಳ ವಿವರ ನೀಡಿ ಸ್ವಾಗತಿಸಿದರು. ಕಾಳಿಂಗರಾಯರ ಬಳಗದ ಸಂಚಾಲಕಿ ಜಯಾ ಪಾರ್ಥಸಾರಥಿ ಸ್ಪರ್ಧೆಗಳನ್ನು ನಡೆಸಿಕೊಟ್ಟರು.

ಸ್ಪರ್ಧೆಗಳ ನಂತರ ಪ್ರತಿಷ್ಠಾನದ ಅಧ್ಯಕ್ಷರೂ, ಪ್ರಸಿದ್ಧ ಸಾಹಿತಿಗಳೂ ಆದ ಪ್ರೊ|| ಚಿ. ಶ್ರೀನಿವಾಸರಾಜು ಬಹುಮಾನಗಳನ್ನು ವಿತರಿಸಿದರು. ಕಲಾವಿದರಾದ ನಾರಾಯಣರಾವ್ ಮಾನೆ, ಪುರಂದರಭರಣಿ ಮತ್ತು ಮಧುರ ರವಿಕುಮಾರ್ ಅವರು ತೀರ್ಪುಗಾರರಾಗಿದ್ದರು.

(ಆ) 'ಸಿರಿ ಕಂಟ' ಕಾರ್ಯಕ್ರಮಗಳು

೧) ಹಸ್ತಪ್ರತಿಶಾಸ್ತ್ರ ತರಗತಿ : ನಾಲ್ಕು ತಿಂಗಳ ಹಸ್ತಪ್ರತಿಶಾಸ್ತ್ರ ತರಗತಿ ಯಶಸ್ವಿಯಾಗಿ ನಡೆದಿದೆ. ಪ್ರೊ|| ನಾ. ಗೀತಾಚಾರ್ಯ ಮತ್ತು ಡಾ|| ಪಿ.ವಿ. ಕೃಷ್ಣಮೂರ್ತಿಗಳೂ ಅಧ್ಯಾಪಕರಾಗಿದ್ದರು. ಡಾ|| ಟಿ.ವಿ. ವೆಂಕಟಾಚಲಶಾಸ್ತ್ರಿ, ಡಾ|| ಕೆಳದಿ ಗುಂಡಾ ಜೋಯಿಸ್, ಪ್ರೊ|| ಕೆ.ಎಸ್. ಮಧುಸೂದನ ವಿಶೇಷ ಉಪನ್ಯಾಸಗಳನ್ನು ನೀಡಿದರು.

೨) ಹಸ್ತಪ್ರತಿ ಸಂಪ್ರತೀಕರಣ : ಹಸ್ತಪ್ರತಿ ಸೇವಾಕೇಂದ್ರದ ಮೂಲಕ ಪ್ರಾಚೀನ ಹಸ್ತಪ್ರತಿಗಳು, ಓಲೇಗರಿ ಮತ್ತು ಕಾಗದ ಪ್ರತಿಗಳನ್ನು ಸಂರಕ್ಷಿಸುವ ಮತ್ತು ಸಂಪ್ರತಿ ಮಾಡುವ ಕಾರ್ಯವೂ ಈ ಅವಧಿಯಲ್ಲಿ ನಡೆದಿದೆ.

(ಇ) 'ಸಿರಿ ಸಂಗೀತ' ಕಾರ್ಯಕ್ರಮಗಳು

೧) ದಿನಾಂಕ ೨೨-೪-೦೭ : ಹರಿದಾಸ ಶ್ರೀ ನಾರಾಯಣ ಶರ್ಮ ಜಯಂತಿ ಅಂಗವಾಗಿ : 'ಶ್ರೀವೈಷ್ಣವ ಕೀರ್ತನ ಸೌರಭ ವಿಶೇಷ ಕಾರ್ಯಕ್ರಮ' ನಾರಾಯಣಶರ್ಮ ಸಂಸ್ಕೃತಿ ಕೇಂದ್ರದ ಸಹಯೋಗದಲ್ಲಿ ನಡೆಯಿತು.

ಶ್ರೀವೈಷ್ಣವ ಹರಿದಾಸರ ಕೀರ್ತನೆಗಳ ಪ್ರಾತ್ಯಕ್ಷಿಕ ಪರಿಚಯ ಇದರ ವಿಶೇಷ. ಹಿರಿಯರಾದ ಬೆಳಗೆರೆ ಕೃಷ್ಣಶಾಸ್ತ್ರಿಗಳು ಉದ್ಘಾಟನೆ ಮಾಡಿದರು. ಪ್ರಥಮ ಪರಿಚಯವಾಗಿ ಆಸೂರಿ ರಾಮಸ್ವಾಮಿ ದಾಸರು ('ಮಾಂಗಿರೀಶ') ಕುರಿತು ಉಪನ್ಯಾಸವನ್ನು ಪ್ರೊ॥ ಜಿ. ಅಶ್ವತ್ಥನಾರಾಯಣ ಅವರು ಮಾಡಿದರು. ಶ್ರೀಮತಿ ಪದ್ಮಜ ಶ್ರೀನಿವಾಸನ್ ಅವರ ತಂಡದವರು ಹಾಡುಗಾರಿಕೆ ಕಾರ್ಯಕ್ರಮವನ್ನು ನಡೆಸಿದರು.

೨) **೨೮ನೇ ವರ್ಷದ ಸಂಸ್ಥಾಪನಾ ದಿನಾಚರಣೆ** : ದಿನಾಂಕ ೬-೫-೦೭: ಸಿರಿಸಂಗೀತ, ಪುಸ್ತಕ ಬಿಡುಗಡೆ ಹಾಗೂ ಪ್ರಶಸ್ತಿ ವಿತರಣೆ ಹಾಗೂ ಡಾ॥ ಎ. ಶ್ರೀಲತಾ ಅವರಿಂದ ಭಾವಗೀತೆಗಳ ಗಾಯನ ನಡೆಯಿತು. ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರ ಹೊಸಗನ್ನಡ ವ್ಯಾಕರಣ ಪುಸ್ತಕ ಬಿಡುಗಡೆಯನ್ನು ಪ್ರೊ॥ ಜಿ. ವೆಂಕಟಸುಬ್ಬಯ್ಯ ಅವರು ನೆರವೇರಿಸಿದರು. ಸಂಸ್ಥಾಪನಾ ದಿನಾಚರಣೆ ಅಂಗವಾಗಿ ಪ್ರಶಸ್ತಿ ವಿತರಣೆಗಳು ನಡೆಯಿತು.

೧) ಸಾವಿತ್ರಮ್ಮ ದತ್ತಿ ಮಹಿಳಾ ಸೃಜನೇತರ ಸಾಹಿತ್ಯ ಪ್ರಶಸ್ತಿಯನ್ನು ಡಾ॥ ಎಸ್.ವಿ. ಪ್ರಭಾವತಿ ಅವರಿಗೆ

೨) 'ಅನಂತರಂಗ ಸಂಶೋಧನಾ ಸಾಹಿತ್ಯ ಪ್ರಶಸ್ತಿ'ಯನ್ನು ಡಾ॥ ಶಿವಾನಂದ ಎಸ್. ವಿರಕ್ತಮಠ ಅವರಿಗೆ ಪ್ರದಾನ ಮಾಡಲಾಯಿತು.

ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರೀ ಮತ್ತು ಡಾ॥ ಸಿ. ವೀರಣ್ಣ ಅವರು ಮುಖ್ಯ ಅತಿಥಿಗಳಾಗಿದ್ದರು.

## (ಈ) ಎಂ.ವಿ.ಸೀ. ಸಂಶೋಧನ ಕೇಂದ್ರದ ಕಾರ್ಯಕ್ರಮಗಳು

೧) **೧೧-೩-೦೭ :** ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ–ಹಂಪಿ, ಕನ್ನಡ ವಿಶ್ವವಿದ್ಯಾಲಯದ ಆಶ್ರಯದಲ್ಲಿ ಸಹೃದಯ ಗೋಷ್ಠಿ ಮೂಲಕ ಪಿಎಚ್.ಡಿ. ವಿದ್ಯಾರ್ಥಿಗಳ ಸಂವಾದ ಹಮ್ಮಿಕೊಂಡಿತ್ತು. ಪ್ರೊ॥ ಚಿ. ಶ್ರೀನಿವಾಸರಾಜು ಅಧ್ಯಕ್ಷತೆ ವಹಿಸಿದ್ದರು. ಸುಮಾರು ೧೨ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಶ್ರೀ ನಾಗರಾಜ ಹೊಸೂರಕರ್ ಅವರು ಸಿದ್ಧಪಡಿಸಿದ್ದ, ಮೈಲಾರಲಿಂಗ ಆಚರಣೆ ಒಂದು ಸಾಂಸ್ಕೃತಿಕ ಅಧ್ಯಯನ ಲೇಖನವನ್ನು ಪ್ರಸ್ತುತ ಪಡಿಸಿದರು. ಮಾರ್ಗದರ್ಶಕರಾದ ಪ್ರೊ॥ ಡಿ. ಲಿಂಗಯ್ಯ, ಪ್ರೊ॥ ನಾ. ಗೀತಾಚಾರ್ಯರು ಉಪಸ್ಥಿತರಿದ್ದರು.

೨) **ದಿನಾಂಕ ೧೩-೫-೦೭ :** ಬೆಳಗ್ಗೆ ಪಿಎಚ್.ಡಿ. ವಿದ್ಯಾರ್ಥಿಗಳ ಸಹೃದಯ ಗೋಷ್ಠಿ ಕಾರ್ಯಕ್ರಮದಲ್ಲಿ ಶ್ರೀ ರಮಾನಂದ ಅವರು ಹರಿದಾಸ ಸಾಹಿತ್ಯದ ಬಗ್ಗೆ ಮತ್ತು ಶ್ರೀ ಮುತ್ತುರಾಜು ಅವರು 'ಮುತ್ತತ್ತಿ ಒಂದು ಅಧ್ಯಯನ' ವಿಷಯದ ಬಗ್ಗೆ ಮಾತನಾಡಿದರು.

೩) **ದಿನಾಂಕ ೨೯-೪-೦೭ರಂದು** ಎಂ.ಫಿಲ್. ವಿದ್ಯಾರ್ಥಿಗಳ ಸಂವಾದ ಗೋಷ್ಠಿ ನಡೆಯಿತು. ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿರುವ ವಿಷಯಗಳ ಸಾರಲೇಖಗಳನ್ನು ಮಂಡಿಸಿದರು. ಮಾರ್ಗದರ್ಶಕರು ಅಗತ್ಯ ಸಲಹೆ ಸೂಚನೆಗಳನ್ನು ನೀಡಿದರು.

❑

## ದಾನಗಳು

### ಗ್ರಂಥದಾನ

| | |
|---|---|
| ೧. ಶ್ರೀ ಸಿ.ಎಸ್. ಗೋವಿಂದರಾವ್ | ೨೯ ಪುಸ್ತಕಗಳು |
| ೨. ಪ್ರೊ॥ ಎಲ್.ಎಸ್. ಶೇಷಗಿರಿರಾವ್ | ೧೩೧ ಪುಸ್ತಕಗಳು |
| ೩. ಮುಂ.ಅ. ವೆಂಕಟೇಶ್ | ೯ ಕನ್ನಡ ಕನ್ನಡ ನಿಘಂಟುಗಳು |
| ೪. ಸಾವಿತ್ರಮ್ಮ ರಾಮಸ್ವಾಮಿ | ೩೪೬ ಪುಸ್ತಕಗಳು |
| ೫. ಶ್ರೀಮತಿ ಜ್ಯೋತಿ | ೩೩ ಪುಸ್ತಕಗಳು |
| ೬. ಡಾ॥ ಜಿ. ಶಕುಂತಲಾ ಬಾಯಿ | ೭ ಸಂಪುಟಗಳು |
| ೭. ಡಾ॥ ಕೆ.ಆರ್. ಗಣೇಶ | ೨೧೬ ಪುಸ್ತಕಗಳು, ಪತ್ರಿಕೆಗಳು |
| ೮. ಸು.ಹ. ಗೋವರ್ಧನ | ೪೪ ಪುಸ್ತಕಗಳು |

### ಉಪಕರಣ ದಾನ

| | |
|---|---|
| ೧. ಹಿರಿಯ ನಾಗರೀಕರ ಸಹೃದಯ ಸಂಘ | ಒಂದು ದೀಪದ ಕಂಬ ಹಿತ್ತಾಳೆಯದು ೧೧/೨ ಅಡಿ ಎತ್ತರ |
| ೨. ಯಾಹೂ ಗ್ರೂಪ್ ಪ್ರೈ. ಲಿ., ಬೆಂಗಳೂರು | ವಾರ್ತಾಪತ್ರದ ಪ್ರಾಯೋಜನೆ ಮತ್ತು ಎಚ್.ಪಿ. ಲೇಸರ್ ಪ್ರಿಂಟರ್ |

### ವಿಶೇಷ ಗ್ರಂಥ ದಾನ

ಶ್ರೀ ಎಂ.ಎ. ವೆಂಕಟಾಚಾರ್ ಮತ್ತು ಶ್ರೀಮತಿ ಎಂ.ಎ. ಸಿಂಗಮ್ಮ – ಎಂ.ವಿ. ರಾಮಾನುಜಯ್ಯಂಗಾರ್ಯರ 'ಕಾವ್ಯ ಕಲಾನಿಧಿ'ಯಿಂದ ೧೮೯೪ ರಿಂದ ೧೯೩೫ರೊಳಗೆ ಮುದ್ರಣವಾಗಿರುವ ಅಮೂಲ್ಯ ಪ್ರಾಚೀನ ಗ್ರಂಥಗಳ ಸು. ೫೦೦ಕ್ಕೂ ಹೆಚ್ಚಿನ ಪ್ರತಿಗಳು.



**ಯಸರ್ಸ್ ಎಕ್ಸ್‌ಪಿರಿಯನ್ಸ್ ಡಿಸೈನ್ ಗೆಳೆಯರ ಬಳಗ**
**ಯಹೂ (ಇಂಡಿಯಾ) ಪ್ರೈ. ಲಿ.,**
೯, ಮಹಾತ್ಮಾಗಾಂಧಿ ರಸ್ತೆ, ಬೆಂಗಳೂರು - ೫೬೦ ೦೦೧ ಇವರು ದಿನಾಂಕ ೧೭-೪-೦೭ರಂದು ರೂ. ೩೧,೦೫೫ ರೂಪಾಯಿಗಳ HP Laserjet 3055 MFP ಮಾಡೆಲ್‌ನ ಪ್ರಿಂಟರ್ ಮತ್ತು ಸ್ಕ್ಯಾನರ್‌ನ್ನು ಪ್ರತಿಷ್ಠಾನಕ್ಕೆ ದಾನವಾಗಿ ನೀಡಿರುತ್ತಾರೆ.

**ಇವರಿಗೆ ಪ್ರತಿಷ್ಠಾನವು ಕೃತಜ್ಞತೆಯನ್ನು ಅರ್ಪಿಸುತ್ತದೆ.**

# ಅಮೂಲ್ಯ ಪ್ರಾಚೀನ ಗ್ರಂಥಗಳು ಮಾರಾಟಕ್ಕಿವೆ

೧೯೦೦ರ ಆಸುಪಾಸಿನಲ್ಲಿದ್ದ ಶ್ರೇಷ್ಠ ವಿದ್ವಾಂಸರಾಗಿದ್ದ ಕೀರ್ತಿಶೇಷ ಎಂ.ಎ. ರಾಮಾನುಜಯ್ಯಂಗಾರ್ ಅವರು ಕನ್ನಡದ ಪ್ರಾಚೀನ ಸಾಹಿತ್ಯ ಕೃತಿಗಳನ್ನು ಸಂಪಾದಿಸಿ ತಮ್ಮದೇ 'ಕಾವ್ಯಕಲಾನಿಧಿ' ಸಂಸ್ಥೆಯ ಮೂಲಕ ಪ್ರಕಟಿಸಿದ್ದರು. ಸುಮಾರು ೫೦ಕ್ಕೂ ಹೆಚ್ಚು ಅಮೂಲ್ಯ ಗ್ರಂಥಗಳನ್ನು ಅವರು ಪ್ರಕಟಿಸಿದ್ದು ಅವುಗಳಲ್ಲಿ ಬಹಳಷ್ಟು ಗ್ರಂಥಗಳು ಪುನರ್ ಮುದ್ರಣವನ್ನಾಗಲಿ ಪರಿಷ್ಕಾರವನ್ನಾಗಲಿ ಕಂಡಿಲ್ಲ. ಅವುಗಳಲ್ಲಿ ಸುಮಾರು ೩೦ ಗ್ರಂಥದ ನೂರಾರು ಪ್ರತಿಗಳನ್ನು ಅವರ ಮಕ್ಕಳಾದ ಶ್ರೀ ಎಂ.ಎ. ವೆಂಕಟಾಚಾರ್ ಮತ್ತು ಶ್ರೀಮತಿ ಎಂ.ಎ. ಸಿಂಗಮ್ಮ ಅವರು ಬಿ.ಎಂ.ಶ್ರೀ. ಪ್ರತಿಷ್ಠಾನಕ್ಕೆ ನೀಡಿದ್ದಾರೆ. ಈ ಮೂವತ್ತು ಗ್ರಂಥಗಳ ತಲಾ ಒಂದೊಂದು ಪ್ರತಿಗಳ ಒಂದು ಸೆಟ್ಟಿಗೆ ೧೦೦೦ ರೂ.ಗಳನ್ನು ೨೦ ಪುಸ್ತಕಗಳ ಸೆಟ್‌ಗೆ ೫೦೦-೦೦ ನಿಗದಿ ಮಾಡಲಾಗಿದ್ದು ಆಸಕ್ತರು ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಪಡೆಯಬಹುದು.

ಈ ಗ್ರಂಥಗಳಿಗೆ ಐತಿಹಾಸಿಕ ಮೌಲ್ಯವಿದ್ದು ಒಂದೊಂದೂ ಅತಿ ಮುಖ್ಯವಾದ ಪ್ರಾಚೀನ ಹಸ್ತಪ್ರತಿಯಷ್ಟೆ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದು, ೧೮೯೪ರಿಂದ ೧೯೩೫ರ ಸುಮಾರಿನ ಮುದ್ರಣಗಳಾಗಿವೆ. ಕೆಲವೇ ಪ್ರತಿಗಳಿದ್ದು ಪ್ರತಿಗಳು ಬೇಕಾದವರು ಪ್ರತಿಷ್ಠಾನದ ಕಚೇರಿಯಲ್ಲಿ ಕಾಯ್ದಿರಿಸಿಕೊಳ್ಳಬೇಕಾಗಿ ಕೋರಿದೆ. ದೂರವಾಣಿ : ೨೬೬೧೫೮೭೭, ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು - ೫೬೦ ೦೧೯.

## ಮಾರಾಟಕ್ಕಿರುವ ಎಂ.ಎ. ರಾಮಾನುಜಯ್ಯಂಗಾರ್ಯರ 'ಕಾವ್ಯ ಕಲಾನಿಧಿ'ಯ ಗ್ರಂಥಗಳ ವಿವರ

| ಕ್ರ ಸಂ. | ಗ್ರಂಥದ ಹೆಸರು | ವರ್ಷ | ಪ್ರತಿಗಳ ಸಂಖ್ಯೆ | ಮಾರಾಟ ದರ | ಪುಟಗಳ ಸಂಖ್ಯೆ |
|---|---|---|---|---|---|
| ೧. | ಅಗ್ಗಳದೇವನ ಚಂದ್ರಪ್ರಭ ಪುರಾಣಂ | ೧೯೦೫ | ೧೧೮ | ೫೦-೦೦ | ೨೪೦ |
| ೨. | ಚಾವುಂಡರಾಯನ ಅಭಿನವದಶ ಕುಮಾರಚರಿತೆ (ಪೂರ್ತಿ) | ೧೯೦೨ | ೧೪ | - | - |
| ೩. | ಚಾವುಂಡರಾಯನ ಅಭಿನವದಶಕುಮಾರ ಚರಿತೆ (ದ್ವಿತೀಯ ಸಂಪುಟ) | ೧೯೦೨ | ೪೮ | - | - |
| ೪. | ಚಾವುಂಡರಾಯನ ಅಭಿನವ ದಶಕುಮಾರ ಚರಿತೆ (ದ್ವಿತೀಯ ಸಂಪುಟ) | - | ೨೮ | - | - |
| ೫. | ವಿದ್ಯಾನಂದನ ಕಾವ್ಯಸಾರಂ | ೧೮೯೪ | ೧೫೦ | ೫೦-೦೦ | ೨೩೫ |
| ೬. | ತಿರುಮಲಾರ್ಯನ ಚಿಕದೇವರಾಜ ವಿಜಯಂ | ೧೮೯೬ | ೧೩ | - | - |
| ೭ | ಚಿಕ್ಕುಪಾಧ್ಯಾಯನ ದಿವ್ಯಸೂರಿಚರಿತೆ | ೧೯೧೧ | ೭೭ | ೩೦-೦೦ | ೧೪೦ |
| ೮. | ಗೋಪಾಲಪ್ರಸಾದಿಯ ಚಿಕದೇವೇಂದ್ರ ವಂಶಾವಳಿ | ೧೯೦೧ | ೯೫ | ೧೦-೦೦ | ೩೦ |
| ೯. | ಕಮಲಭವನ ಶಾಂತೀಶ್ವರಪುರಾಣಂ | ೧೯೧೨ | ೮ | | |
| ೧೦. | ಗುಬ್ಬಿಮಲ್ಲಣ್ಣಾರ್ಯನ ಭಾವಚಿಂತಾರತ್ನಂ | ೧೯೩೩ | ೬೫೩ | ೨೦-೦೦ | ೮೦ |
| ೧೧. | ಕನಕದಾಸನ ನಳಚರಿತೆ | ೧೯೦೬ | ೧೯೯ | ೩೦-೦೦ | ೧೧೦ |
| ೧೨. | ಗುರುಲಿಂಗವಿಭುವಿನ ಭಿಕ್ಷಾಟನಚರಿತೆ | ೧೯೦೮ | ೫೧ | ೩೦-೦೦ | ೯೮ |
| ೧೩. | ತಿರುಮಲೆ ವೈದ್ಯನ ಉತ್ತರರಾಮಾಯಣಂ | ೧೯೧೦ | ೩೯ | | |
| ೧೪. | ಮಹಾಲಕ್ಷ್ಮಿಯ ಶ್ರೀರಾಮಪಟ್ಟಾಭಿಷೇಕಂ | ೧೯೨೪ | ೩೭ | ೩೦-೦೦ | ೧೧೦ |
| ೧೫. | ಗೋಪಕವಿಯ ನಂದಿಮಹಾತ್ಮ್ಯಮ | ೧೯೦೭ | ೨೯ | ೩೦-೦೦ | ೧೨೦ |
| ೧೬. | ಕೋನಯ್ಯನ ಗಯ ಚರಿತ್ರೆ | ೧೯೧೫ | ೧೩೩ | ೫೦-೦೦ | ೩೦೦ |
| ೧೭ | ಚಿಕುಪಾಧ್ಯಾಯನ ವಿಷ್ಣುಪುರಾಣ (ಪ್ರಥಮಾಂಶ ಮಾತ್ರ) | ೧೯೧೪ | ೧೪೫ | ೩೦-೦೦ | ೧೦೦ |
| ೧೮. | ಚಿಕ್ಕುಪಾಧ್ಯಾಯನ ವಿಷ್ಣುಪುರಾಣ (ಚತುರ್ಥಾಂಶ ಮಾತ್ರ) | ೧೯೧೧ | ೧೫ | - | - |
| ೧೯. | ಚಿಕ್ಕುಪಾಧ್ಯಾಯನ ವಿಷ್ಣುಪಾರಣ (೧,೪,೫ ಅಂಶಗಳು ಪೂರ್ತ) | - | ೧೯ | - | - |
| ೨೦. | ಭಾಳಲೋಚನ ಬತ್ತೀಸ ಪುತ್ಥಳೀ ಕಥೆಗಳು | ೧೯೦೮ | ೪೧೩ | ೩೦-೦೦ | ೧೩೦ |
| ೨೧. | ಉತ್ತರರಾಮ ಚರಿತ್ರ ಕಥೆ (ನಾಟಕದ ಗದ್ಯಾನುವಾದ) | - | ೩೬ | - | - |
| ೨೨. | ಮುಮ್ಮಡಿ ಕೃಷ್ಣರಾಜರ ಶಾಕುಂತಲ ನಾಟಕ ನವೀನ ಟೀಕೆ | ೧೯೧೪ | ೬೧ | ೪೦-೦೦ | ೧೮೦ |
| ೨೩. | ಮುಮ್ಮಡಿ ಕೃಷ್ಣರಾಜರ ವತ್ಸರಾಜ ಕಥೆ | ೧೦೪ | ೧೨ | | |
| ೨೪. | ಸುಭಾಷಿತ ಮುಕ್ತಕ ಶತಕಂ | ೧೮೯೮ | ೧೧ | | |
| ೨೫. | ಕರ್ಣಾಟಕ ಶಬ್ದಸಾರ ನಿಘಂಟು | ೧೮೯೭ | ೧೨೩ | ೧೦-೦೦ | ೩೨ |
| ೨೬. | ಕರ್ಣಾಟಕ ಸಂಜೀವನ (ನಿಘಂಟು) | ೧೮೯೬ | ೨೧೭ | ೧೦-೦೦ | ೧೧ |
| ೨೭. | ಪ್ರಧಾನಿ ತಿರುಮಲಾರ್ಯನ ಕರ್ಣವೃತ್ತಾಂತರ ಕಥೆ | ೧೯೧೭ | ೨೩ | - | - |
| ೨೮. | ಸಂಚಿಹೊನ್ನಮ್ಮನ ಹದಿಬದೆಯಧರ್ಮಂ | ೧೯೩೬ | ೩೧೨ | ೨೦-೦೦ | ೫೪ |
| ೨೯. | ಕೃಷ್ಣಗೋಪಿ ವಿಲಾಸ | ೧೮೯೪ | ೩೫ | - | - |
| ೩೦. | ಚಿಕದೇವರಾಯನ ಗೀತಗೋಪಾಲ ಪ್ರಬಂಧ | ೧೯೦೫ | ೨೫ | - | - |
| ೩೧. | ವೇದಾಂತ ವಿವೇಕ ಸಾರ | ೧೯೦೪ | ೮೨ | ೪೦-೦೦ | ೧೬೬ |
| ೩೨. | ಜೀನೇಶ್ವರ ಸಾಂಗತ್ಯ | - | ೧೧೫ | ೧೦-೦೦ | ೯ |
| ೩೩. | ತಿರುಮಲಾರ್ಯನ ಚಿಕದೇವರಾಯ ವಂಶಾವಳಿ | ೧೯೩೩ | ೨೪೮ | ೩೦-೦೦ | ೧೫೮ |
| ೩೪. | ಸುವ್ರತ | ೧೯೧೫ | ೨೮೩ | ೩೦-೦೦ | ೧೮೪ |
| ೩೫. | ಪ್ರಮಾಣ ಪ್ರಮೇಯ ವಿವೇಕ | ೧೯೧೨ | ೫೦ | ೧೦-೦೦ | ೫೦ |
| ೩೬. | ಕವಿರನ್ನನ ಗದಾಯುದ್ಧ (೧,೨,೩ ಆಶ್ವಾಸಗಳು ಮಾತ್ರ) | ೧೯೨೪ | ೧೮ | | |

### ಮಾರಾಟದ ಸೂಚನೆಗಳು

೧. ಬೆಲೆ ನಮೂದಿಸಿರುವ ಪುಸ್ತಕಗಳು ಮಾತ್ರ ಬಿಡಿ ಪ್ರತಿಯಲ್ಲಿ ದೊರೆಯುತ್ತವೆ.
೨. ೩೦ರಿಂದ ೩೫ ಪುಸ್ತಕಗಳ ಸೆಟ್ ಬೆಲೆ ರೂ. ೧,೦೦೦-೦೦
೩. ೨೫ರಿಂದ ೩೦ ಪುಸ್ತಕಗಳ ಸೆಟ್ ಬೆಲೆ ರೂ. ೭೫೦-೦೦
೪. ೨೦ರಿಂದ ೨೫ ಸೆಟ್‌ಗಳ ಬೆಲೆ ರೂ. ೫೦೦-೦೦

## ಕಾರ್ಯಕ್ರಮಗಳ ಪತ್ರಿಕಾ ವರದಿಗಳು

### ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಕ್ಕಾಗಿ ನಿಯೋಗ : ಚಿಮೂ ಸಲಹೆ

ಬೆಂಗಳೂರು ಜ. ೫ : ಕನ್ನಡಕ್ಕೆ ಶಾಸ್ತ್ರೀಯ ಸ್ಥಾನಮಾನ ನೀಡುವಂತೆ ಕೇಂದ್ರ ಸರ್ಕಾರವನ್ನು ಆಗ್ರಹಿಸಲು ರಾಜ್ಯ ಸರ್ಕಾರ ನಿಯೋಗ ತೆಗೆದುಕೊಂಡು ಹೋಗಬೇಕು ಎಂದು ಪ್ರಸಿದ್ಧ ಸಂಶೋಧಕ ಡಾ॥ ಎಂ. ಚಿದಾನಂದಮೂರ್ತಿ ಆಗ್ರಹಿಸಿದ್ದಾರೆ.

ಕನ್ನಡ ಗೆಳೆಯರ ಬಳಗ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಶಂಬಾ ವಿಚಾರ ವೇದಿಕೆಗಳ ಸಂಯುಕ್ತಾಶ್ರಯದಲ್ಲಿ ನಡೆದ 'ಸಂಶೋಧನಾ ದಿನ'ದ ಅಧ್ಯಕ್ಷ ಭಾಷಣದಲ್ಲಿ ಆಗ್ರಹಿಸಿದ ಅವರು, ತಮಿಳಿಗೆ ಯಾವುದೇ ಮಾನದಂಡ ಇಲ್ಲದೇ ರಾಜಕೀಯ ಒತ್ತಡಕ್ಕೆ ಮಣಿದು ಶಾಸ್ತ್ರೀಯ ಭಾಷೆಯ ಸ್ಥಾನ ನೀಡಿದ ಕೇಂದ್ರ ಸರ್ಕಾರ ತಮಿಳಿಗಿಂತ ಹೆಚ್ಚು ಅರ್ಹತೆ ಇರುವ ಕನ್ನಡ ಭಾಷೆಗೆ ಈ ಮನ್ನಣೆ ನೀಡಲು ಹಿಂದೆ ಮುಂದೆ ನೋಡುತ್ತಿರುವುದು ಪ್ರಜಾಪ್ರಭುತ್ವದ ನೀತಿಗೆ ವಿರುದ್ಧವಾಗಿದೆ ಎಂದು ಹೇಳಿದರು.

ಸಂಶೋಧನಾ ದಿನದ ಅಂಗವಾಗಿ ಅರುವತ್ತು ಸಾರ್ಥಕ ವರ್ಷಗಳನ್ನು ಪೂರೈಸಿದ ಇತಿಹಾಸ ತಜ್ಞ ಡಾ॥ ಎಚ್.ಎಸ್. ಗೋಪಾಲರಾವ್ ದಂಪತಿಗಳಿಗೆ ಆತ್ಮೀಯ ಸನ್ಮಾನ ಮಾಡಲಾಯಿತು. ಸನ್ಮಾನ ಸ್ವೀಕರಿಸಿ ಮಾತನಾಡಿದ ಗೋಪಾಲರಾವ್, ಕರ್ನಾಟಕ ಸಂಸ್ಕೃತಿಯ ಸ್ಪಷ್ಟ ಕುರುಹುಗಳು ಮಧ್ಯ ಭಾರತದಲ್ಲಿ ಕಾಣಸಿಗುತ್ತವೆ. ಈ ನಿಟ್ಟಿನಲ್ಲಿ ಒಂದು ತಂಡ ಕ್ಷೇತ್ರಕಾರ್ಯ ನಡೆಸುವ ಅಗತ್ಯವಿದೆ. ಅದು ಸುವರ್ಣ ಕರ್ನಾಟಕ ವರ್ಷಾಚರಣೆ ಸಂದರ್ಭದಲ್ಲಿ ಆದರೆ ಅರ್ಥಪೂರ್ಣ ಎಂದರು.

ಇದೇ ಸಂದರ್ಭದಲ್ಲಿ ಶಂಬಾ ಜೋಶಿ ಅವರ 'ಎದ್ದೇಳು ಕನ್ನಡಿಗ' ಕೃತಿಯನ್ನು ಬಿಡುಗಡೆ ಮಾಡಿದ ಪ್ರೊ॥ ಚಿ. ಶ್ರೀನಿವಾಸರಾಜು, ಶಂಬಾ ಅವರು ನಾಡು ನುಡಿಯ ಚಿಂತನೆಗಳು ನಮ್ಮ ಯುವ ಜನತೆಗೆ ಸ್ಫೂರ್ತಿಯಾಗಬೇಕು ಎಂದರು.

ಆರಂಭದಲ್ಲಿ ಬಳಗದ ಸಂಚಾಲಕ ರಾ.ನಂ. ಚಂದ್ರಶೇಖರ ಪ್ರಾಸ್ತಾವಿಕ ಭಾಷಣ ಮಾಡಿದರು.

■ *ಉದಯವಾಣಿ*

### ಸಿರಿ ಸಂಗೀತದಲ್ಲಿ 'ಶ್ರೀವೈಷ್ಣವ ಕೀರ್ತನ ಸೌರಭ'

ಕನ್ನಡ ಹರಿದಾಸ ಸಾಹಿತ್ಯ, ತ್ರಿವೇಣಿ ಸಂಗಮವಾಗಿದ್ದು ದ್ವೈತ-ಅದ್ವೈತ-ವಿಶಿಷ್ಟಾದ್ವೈತ ಈ ಮೂರೂ ವಾಹಿನಿಗಳು ಸಮನಾಗಿ ಸೇರಿವೆ ಎಂಬುದು ಈಚಿನ ಸಂಶೋಧನೆಗಳು ದೃಢಪಡಿಸಿವೆ. ಆದರೂ ಹರಿದಾಸ ಸಾಹಿತ್ಯ ಎಂದರೆ ಮಾಧ್ವಪರಂಪರೆ ಎಂಬ ನಂಬಿಕೆಯೇ ಬೇರೂರಿದೆ. ಅದು ಬದಲಾವಣೆಯಾಗಬೇಕು. ಈ ನಿಟ್ಟಿನಲ್ಲಿ ನಾ. ಗೀತಾಚಾರ್ಯರು - ನಾರಾಯಣಶರ್ಮ ಸಂಸ್ಕೃತಿ ಕೇಂದ್ರದಿಂದ ಉತ್ತಮ ಪ್ರಯತ್ನ ಮಾಡುತ್ತಿದ್ದಾರೆ.

ಈ ಹಿನ್ನೆಲೆಯಲ್ಲಿ ವಿಶಿಷ್ಟಾದ್ವೈತ ಹರಿದಾಸ ಪರಂಪರೆಯನ್ನು ಪರಿಚಯಿಸುವ ಉದ್ದೇಶದಿಂದ, ಈ ವಿಶಿಷ್ಟ ಕಾರ್ಯಕ್ರಮ ಮಾಲೆಯನ್ನು ಹಮ್ಮಿಕೊಳ್ಳಲಾಗಿದೆ. ಕನ್ನಡ ಸಾಹಿತ್ಯಕ್ಕೆ ಶ್ರೀವೈಷ್ಣವ ಹರಿದಾಸ ಪರಂಪರೆಯನ್ನು ಪರಿಚಯಿಸುವ ನಾರಾಯಣಶರ್ಮರ ಮತ್ತು ವಿಶಿಷ್ಟಾದ್ವೈತ ಗುರುಗಳಾದ ರಾಮಾನುಜಾಚಾರ್ಯರ ಜಯಂತಿಯಂದು ಆರಂಭಿಸಿರುವುದು ಶ್ಲಾಘನೀಯವಾಗಿದೆ. ಇದು ನಿರಂತರವಾಗಿ ಸಾಗಲಿ ಎಂದು ಪ್ರಸಿದ್ಧ ವಿದ್ವಾಂಸರಾದ ಬೆಳಗೆರೆ ಕೃಷ್ಣಶಾಸ್ತ್ರಿ ಅವರು ಉದ್ಘಾಟಿಸುತ್ತಾ ತಿಳಿಸಿದರು.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಆಶ್ರಯದಲ್ಲಿ ಬೆಂಗಳೂರಿನ ಬಿ.ಎಂ.ಶ್ರೀ. ಕಲಾಭವನದಲ್ಲಿ ಏರ್ಪಾಡಾಗಿದ್ದ ಈ ಕಾರ್ಯಕ್ರಮದಲ್ಲಿ ಪ್ರಥಮವಾಗಿ ಆಸೂರಿ ರಾಮಸ್ವಾಮಿ ದಾಸರನ್ನು ಕುರಿತು ಪ್ರಸಿದ್ಧ ವಿದ್ವಾಂಸರಾದ ಪ್ರೊ॥ ಜಿ. ಅಶ್ವತ್ಥನಾರಾಯಣ ಅವರು ಮಾತನಾಡಿದರು. ನಾ. ಗೀತಾಚಾರ್ಯ ಅವರು ಸ್ವಾಗತಿಸಿದರು. ಶ್ಯಾಮಲಾರತ್ನಕುಮಾರಿ ವಂದನಾರ್ಪಣೆ ಮಾಡಿದರು. ಪದ್ಮಜ ಶ್ರೀನಿವಾಸ್ ಅವರು ಆಸೂರಿಯವರ ಕೀರ್ತನೆಗಳನ್ನು ಸುಶ್ರಾವ್ಯವಾಗಿ ಹಾಡಿದರು.

■ *ರಾಜ್ಯಪ್ರಗತಿ ೧೦-೫-೦೭*

### ಸಿರಿಸಂಗೀತ

ನರಸಿಂಹರಾಜ ಕಾಲೋನಿಯ ಬಿ.ಎಂ.ಶ್ರೀ. ಪ್ರತಿಷ್ಠಾನದ ಸಭಾಂಗಣದಲ್ಲಿ ಗಾಯಕಿ ಡಾ॥ ಎಂ. ಶ್ರೀಲತಾ ಮತ್ತು ತಂಡ ಇತ್ತೀಚೆಗೆ ಸುಗಮ ಸಂಗೀತ ಕಾರ್ಯಕ್ರಮ ಪ್ರಸ್ತುತಪಡಿಸಿದರು.

■ *ಉದಯವಾಣಿ, ೧೩-೫-೦೭*

### 'ಹರಿದಾಸ ಸಾಹಿತ್ಯ ತ್ರಿವೇಣಿ ಸಂಗಮವಾಗಿದೆ'

ಬೆಂಗಳೂರು: ಕನ್ನಡ ಹರಿದಾಸ ಸಾಹಿತ್ಯ, ತ್ರಿವೇಣಿ ಸಂಗಮವಾಗಿದ್ದು ದ್ವೈತ-ಅದ್ವೈತ-ವಿಶಿಷ್ಟಾದ್ವೈತ ಈ ಮೂರೂ ವಾಹಿನಿಗಳು ಸಮನಾಗಿ ಸೇರಿವೆ ಎಂಬುದು ಇತ್ತೀಚಿನ ಸಂಶೋಧನೆಗಳು ದೃಢಪಡಿಸಿವೆ ಎಂದು ವಿದ್ವಾಂಸ ಪ್ರೊ॥ ನಾ. ಗೀತಾಚಾರ್ಯ ಹೇಳಿದರು.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ನಾರಾಯಣಶರ್ಮ ಸಂಸ್ಕೃತಿ ಕೇಂದ್ರವು ಪದ್ಮನಾಭನಗರದ ಲಕ್ಷ್ಮೀಕಾಂತ ದೇವಾಲಯದಲ್ಲಿ ಏರ್ಪಡಿಸಿದ್ದ ಸಿರಿ ಸಂಗೀತದಲ್ಲಿ 'ಶ್ರೀವೈಷ್ಣವ ಕೀರ್ತನ ಸೌರಭ' ಕಾರ್ಯಕ್ರಮದಲ್ಲಿ ಲಕ್ಷ್ಮೀಶನ ಬಗ್ಗೆ ಮಾತನಾಡುತ್ತಿದ್ದರು. ವಿದುಷಿ ಅಂಬುಜ ಪ್ರಕಾಶ್ ಮತ್ತು ಸಂಗಡಿಗರು ಲಕ್ಷ್ಮೀಶ ಕವಿಯ ಕೀರ್ತನಗಳನ್ನು ಸುಶ್ರಾವ್ಯವಾಗಿ ಹಾಡಿದರು.

■ *ವಿಜಯ ಕರ್ನಾಟಕ, ೪-೦೫-೦೭*

### ಹೊಸಗನ್ನಡ ವ್ಯಾಕರಣ ಕೃತಿ ಬಿಡುಗಡೆ

ಬೆಂಗಳೂರು, ಮೇ ೨೩- ಲೇಖಕ ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ ಅವರು ರಚಿಸಿದ ಹೊಸಗನ್ನಡ ವ್ಯಾಕರಣ ಪುಸ್ತಕ ಬಿಡುಗಡೆಗೊಂಡಿದೆ.

ನಗರದ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ೨೮ನೇ ಸಂಸ್ಥಾಪನಾ ದಿನಾಚರಣೆ ಅಂಗವಾಗಿ ಏರ್ಪಡಿಸಿದ್ದ ಸಮಾರಂಭದಲ್ಲಿ ನಿಘಂಟು ತಜ್ಞ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು ಪುಸ್ತಕವನ್ನು ಬಿಡುಗಡೆಗೊಳಿಸಿದರು.

ಹೊಸಗನ್ನಡ ವ್ಯಾಕರಣವು ವಿದ್ಯಾರ್ಥಿಗಳಿಗಲ್ಲದೆ ಅಧ್ಯಾಪಕರುಗಳಿಗೂ ಅಮೂಲ್ಯವಾದ ಗ್ರಂಥವಾಗಿದೆ ಎಂದು ಅವರು ತಿಳಿಸಿದರು.

ಗುರುಗಳಾದ ಎಂ.ವಿ. ಸೀತಾರಾಮಯ್ಯನವರ ಕನಸಿನ ಪ್ರತೀಕವಾಗಿ, ನಾಡಿನ ಹೆಮ್ಮೆಯ ಸಂಶೋಧನಾ ಸಂಸ್ಥೆಯಾಗಿ ಬಿ.ಎಂ.ಶ್ರೀ. ಪ್ರತಿಷ್ಠಾನ ೨೮ ವರ್ಷಗಳನ್ನು ಪೂರೈಸಿರುವುದು ಹೆಮ್ಮೆಯ ವಿಚಾರ. ಸಂಸ್ಥೆಯ ಏಳಿಗೆಗೆ ಶ್ರಮಿಸಿದವರೆಲ್ಲ ಅಭಿನಂದನಾರ್ಹರು ಎಂದು ಮುಖ್ಯ ಅತಿಥಿಗಳಾದ ಡಾ॥ ಸಿ. ವೀರಣ್ಣ ಶಿಷ್ಯರಾಗಿ ತಮ್ಮ ಅನುಭವಗಳನ್ನು ಹಂಚಿಕೊಂಡರು.

ಇದೇ ಸಂದರ್ಭದಲ್ಲಿ ಪ್ರತಿಷ್ಠಾನದ ೨೦೦೬ನೇ ಸಾಲಿನ ದತ್ತಿ ಪ್ರಶಸ್ತಿಗಳನ್ನು ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿಗಳಿಂದ ವಿತರಿಸಲಾಯಿತು.

ಪ್ರೊ. ಟಿ. ಶ್ರೀನಿವಾಸರಾಜು, ರಮಾದೇವಿ ವಿಶ್ವೇಶ್ವರಯ್ಯ, ಎಸ್.ಪಿ. ಶ್ರೀನಿವಾಸರಾವ್, ನಾ. ಗೀತಾಚಾರ್ಯ ಮತ್ತಿತರರು ಉಪಸ್ಥಿತರಿದ್ದರು.

■ *ಸಂಯುಕ್ತ ಕರ್ನಾಟಕ, ೨೪-೫-೦೭*

## ಭಾವಗೀತೆಗಳ ಭಾವಾರ್ಥ ತಿಳಿಸುವ ಪುಸ್ತಕ ಅಗತ್ಯ

ಬೆಂಗಳೂರು, ಮೇ ೨೪ - ಭಾವಗೀತೆಗಳ ಭಾವಾರ್ಥ ತಿಳಿಸುವಂತಹ ಪುಸ್ತಕದ ಅವಶ್ಯಕತೆ ಇದೆ ಎಂದು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಗೌರವಾಧ್ಯಕ್ಷ ಜಿ. ನಾರಾಯಣ ಅಭಿಪ್ರಾಯ ಪಟ್ಟರು.

ಪ್ರತಿಷ್ಠಾನ ಏರ್ಪಡಿಸಿದ್ದ ಸುಗಮ ಸಂಗೀತ ಸ್ಪರ್ಧೆಯನ್ನು ಉದ್ಘಾಟಿಸಿ ಮಾತನಾಡಿದ ಅವರು ಇಂದಿನ ದಿನಗಳಲ್ಲಿ ನಾಡಿನ ಅನೇಕ ಮಕ್ಕಳು ಭಾವಗೀತೆಗಳನ್ನು ಹಾಡುತ್ತಿರುವುದು ಸಂತೋಷದ ವಿಚಾರವಾದರೂ ಮಕ್ಕಳಿಗೆ ಗೀತೆಗಳ ಅರ್ಥ ಹಾಗೂ ಬರೆದ ಕವಿಯ ಹೆಸರು ಗೊತ್ತಿರುವುದಿಲ್ಲವಾದ್ದರಿಂದ ಅದನ್ನು ತಿಳಿಸುವಂತಹ ಪ್ರಾತಿನಿಧಿಕ ಪುಸ್ತಕ ಅಗತ್ಯವಿದೆ ಎಂದರು.

ಬಿ.ಎಂ.ಶ್ರೀ. ನೆನಪಿಗಾಗಿ ಭಾವಗೀತೆಗಳ ಸ್ಪರ್ಧೆ, ಸುವರ್ಣ ಕರ್ನಾಟಕದ ನೆನಪಿಗಾಗಿ ನಾಡಗೀತೆ ಸ್ಪರ್ಧೆ, ಪಿ. ಕಾಳಿಂಗರಾಯರ ನೆನಪಿನಲ್ಲಿ ಜನಪದ ಗೀತೆಗಳ ಸ್ಪರ್ಧೆಯನ್ನು ೩ ವಿಭಾಗಗಳಲ್ಲಿ ಆಯೋಜಿಸಲಾಗಿತ್ತು.

**ಸ್ಪರ್ಧೆಯಲ್ಲಿ ವಿಜೇತರಾದವರ ವಿವರ ಇಂತಿದೆ :**

**ಭಾವಗೀತೆ :** ಸಮರ್ಥ ಎಸ್.-ಪ್ರಥಮ, ಅನೂಷಾ ವೆಂಕಟೇಶ್-ದ್ವಿತೀಯ, ಆದಿತಿ ಬಿ.ಪಿ.-ತೃತೀಯ ಬಹುಮಾನ ಗಳಿಸಿದರು.

**ಜಾನಪದ ಗೀತೆಯಲ್ಲಿ** ಬಿ.ಎಂ. ಪೂರ್ಣಿಮಾ ಪ್ರಸಾದ್, ರೋಷನ್ ಶೆಟ್ಟಿ, ಹರಿಚರಣ ಹೊಳ್ಳ, ನಾಡಗೀತೆಯಲ್ಲಿ ಶೀತಲ್ ಆರ್.ಪಿ., ಅರ್ಚನ ಆರ್. ಹಾಗೂ ಬಿ.ಎಂ. ಪೂರ್ಣಿಮಾ ಪ್ರಸಾದ್ ಮೊದಲ ಮೂರು ಬಹುಮಾನಗಳನ್ನು ಗಳಿಸಿದರು.

■ *ಸಂಯುಕ್ತ ಕರ್ನಾಟಕ*

ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಬಿ.ಎಂ.ಶ್ರೀ. ಪ್ರತಿಷ್ಠಾನಗಳ ಸಂಯುಕ್ತ ಆಶ್ರಯದಲ್ಲಿ ಮಾ. ೨೭ರಂದು ಬಿ.ಎಂ.ಶ್ರೀ. ಪ್ರತಿಷ್ಠಾನದ ಎಂ.ವಿ.ಸೀ. ಸಭಾಂಗಣದಲ್ಲಿ ಪರಿಷತ್ತಿನ ದತ್ತಿ ಉಪನ್ಯಾಸ ಮತ್ತು ಪ್ರತಿಷ್ಠಾನದ ಸಿರಿ ಸಂಗೀತ ನಡೆಯಿತು.

ಕಾರ್ಯಕ್ರಮವನ್ನು ಬೆಂಗಳೂರು ಮಹಾನಗರ ಪಾಲಿಕೆ ಮಾಜಿ ಸದಸ್ಯ ಬಿ.ಎಸ್. ಸತ್ಯನಾರಾಯಣ ಅವರು ಉದ್ಘಾಟಿಸಿದರು. ಆದರ್ಶ ಸುಗಮ ಸಂಗೀತ ಅಕಾಡೆಮಿಯ ಅಧ್ಯಕ್ಷ, ಸುಗಮ ಸಂಗೀತ ಗಾಯಕ ಕಿಕ್ಕೇರಿ ಕೃಷ್ಣಮೂರ್ತಿ ಅವರು 'ಭಾವಗೀತೆ-ಸ್ವರ ಸಂಯೋಜನೆ' ಕುರಿತು ಪ್ರಾತ್ಯಕ್ಷಿಕೆ ಸಹಿತ ಉಪನ್ಯಾಸ ನೀಡಿದರು. ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಪ್ರೊ. ನಾ. ಗೀತಾಚಾರ್ಯ, ಕವಯಿತ್ರಿ ಎಸ್.ಜಿ. ಮಾಲತಿ ಶೆಟ್ಟಿ ಅವರು ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು. ನಗರ ಜಿಲ್ಲಾ ಪರಿಷತ್ತಿನ ಅಧ್ಯಕ್ಷರಾದ ಶ್ರ.ದೇ. ಪಾರ್ಶ್ವನಾಥ್ ಅಧ್ಯಕ್ಷತೆ ವಹಿಸಿದ್ದರು. ಶ್ರೀ ವಿಜಯೇಂದ್ರ ಅವರು ಕಾರ್ಯಕ್ರಮ ನಡೆಸಿ ಕೊಟ್ಟರು.

■ *ಉದಯವಾಣಿ, ೨೯-೩-೦೭*

## ಶ್ರದ್ಧಾಂಜಲಿ

೧) ಖ್ಯಾತ ಲೇಖಕ ಹಾಗೂ ಹಿರಿಯ ಪತ್ರಕರ್ತ **ಶ್ರೀ ಜಿ.ಎಸ್. ಸದಾಶಿವ** ಅವರು ದಿನಾಂಕ ೯-೧-೦೭ರಂದು ಬೆಂಗಳೂರಿನಲ್ಲಿ ನಿಧನರಾದರು. ಇವರು ಪ್ರಜಾವಾಣಿ, ಮಯೂರ, ಸಂಯುಕ್ತ ಕರ್ನಾಟಕ, ಕನ್ನಡಪ್ರಭ ಸಂಪಾದಕರಾಗಿದ್ದರು. ಇವರಿಗೆ ರಾಜ್ಯೋತ್ಸವ ಪ್ರಶಸ್ತಿ (೨೦೦೬) ಲಭಿಸಿತ್ತು

೨) ಖ್ಯಾತ ಕತೆಗಾರ **ಶ್ರೀ ರಾಘವೇಂದ್ರ ಖಾಸನೀಸರು** ದಿನಾಂಕ ೧೫-೩-೦೭ರಂದು ನಿಧನರಾದರು. ೧೯೩೩ರಲ್ಲಿ ಜನಿಸಿದ್ದ ಇವರು ಗ್ರಂಥಾಲಯ ವಿಭಾಗದಲ್ಲಿ ಡಿಪ್ಲೋಮಾ ಪಡೆದು ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದರಲ್ಲದೆ ತಬ್ಬಲಿಗಳು, ಖಾಸನೀಸರ ಕಥೆಗಳು ಮುಂತಾದ ಕೃತಿಗಳಿಂದ ಸಾಹಿತ್ಯ ಲೋಕದಲ್ಲಿ ಖ್ಯಾತರಾಗಿದ್ದರು. ೧೯೯೬ರ ರಾಜ್ಯಪ್ರಶಸ್ತಿಗೂ ಭಾಜನರಾಗಿದ್ದರು.

೩) **ಡಾ. ದೇವೇಂದ್ರಕುಮಾರ ಹಕಾರಿ** (೧೪-೪-೧೯೩೧ - ೭-೪-೦೭) ಕರ್ನಾಟಕ ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕರು, ಖ್ಯಾತ ಜನಪದ ತಜ್ಞರಾಗಿದ್ದ ಶ್ರೀಯುತರು ದಿನಾಂಕ ೭-೪-೦೭ರಂದು ಧಾರವಾಡದಲ್ಲಿ ನಿಧನರಾದರು. ಸಾಹಿತ್ಯ ಅಕಾಡೆಮಿಯ ಬಹುಮಾನ, ರಾಜ್ಯೋತ್ಸವ ಪ್ರಶಸ್ತಿ ಮುಂತಾದವುಗಳಿಗೆ ಭಾಜನರಾಗಿದ್ದರು. ಕಾದಂಬರಿ, ನಾಟಕ, ಜೀವನ ಚರಿತ್ರೆ, ಸಂಪಾದನೆ ಸಾಹಿತ್ಯ ಕ್ಷೇತ್ರಗಳಲ್ಲೂ ಕೃತಿಗಳನ್ನು ರಚಿಸಿ ಜನಪ್ರಿಯರಾಗಿದ್ದರು.

೪) **ಪೂರ್ಣಚಂದ್ರ ತೇಜಸ್ವಿ :** ಸಾಹಿತ್ಯಕ್ಷೇತ್ರದಲ್ಲಿ ದಿಗ್ಗಜರಂತಿದ್ದ ಶ್ರೀಯುತರು ಡಾ. ಕುವೆಂಪು ಅವರ ಸುಪುತ್ರರು. ದಿನಾಂಕ ೮-೯-೧೯೩೮ರಂದು ಶಿವಮೊಗ್ಗ ಜಿಲ್ಲೆಯ ಕುಪ್ಪಳ್ಳಿಯಲ್ಲಿ ಜನಿಸಿದ್ದ ಶ್ರೀಯುತರು ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಗಳನ್ನು ನೀಡಿರುತ್ತಾರೆ. ರಾಜ್ಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರಗಳಲ್ಲದೆ ಕನ್ನಡ ನಾಡಿನ ಪ್ರತಿಷ್ಠಿತ 'ಪಂಪ' ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿಗೂ ಭಾಜನರಾಗಿದ್ದರು. ಇವರು ಖ್ಯಾತ ಕತೆಗಾರರು, ಕಾದಂಬರಿಕಾರರೂ ಆಗಿದ್ದರಲ್ಲದೆ ಪರಿಸರ ಪ್ರೇಮಿ ಹಾಗೂ ಶ್ರೇಷ್ಠ ಛಾಯಾಚಿತ್ರಗಾರರೂ ಸಹ ಆಗಿದ್ದರು. ಇವರು ರಚಿಸಿರುವ ವೈವಿಧ್ಯಪೂರ್ಣ ಕೃತಿಗಳ ಸಂಖ್ಯೆ ೩೫ನ್ನೂ ಮೀರುತ್ತದೆ. ಇವರು ಮರಣಿಸಿದ್ದು ೫-೪-೦೭ ಸ್ವಗ್ರಾಮ ಮೂಡಿಗೆರೆಯ ತೋಟದ ಮನೆಯಲ್ಲಿ.

೫) **ಪ್ರೊ॥ ಕೆ. ರಾಮದಾಸ್ :** ಶಿವಮೊಗ್ಗ ಜಿಲ್ಲೆಯವರಾದ ಪ್ರೊ॥ ಕೆ. ರಾಮದಾಸ್ ಜೂನ್ ೧೯, ೨೦೦೭ರಂದು ತಮ್ಮ ಅರವತ್ತಾರನೆಯ ವಯಸ್ಸಿನಲ್ಲಿ ನಿಧನರಾದರು. ಕನ್ನಡ ಅಧ್ಯಾಪಕರಾಗಿದ್ದ ರಾಮದಾಸ್ ಅವರು ಮೈಸೂರಿನ ಕುವೆಂಪು ನಗರದಲ್ಲಿನ 'ಚಾರ್ವಾಕ' ಸ್ವಗೃಹದಲ್ಲಿ ಕೊನೆಯುಸಿರೆಳೆದರು. ಇವರು ನಮ್ಮ ಕಾಲದ ಅಪರೂಪದ ವಿಚಾರವಾದಿಗಳು ಹಾಗು ಸಂಘಟಕರಾಗಿದ್ದರು. ಪ್ರಗತಿಪರ ಚಿಂತಕ ಡಾ॥ ರಾಮ ಮನೋಹರ ಲೋಹಿಯಾ ಅವರ ಸಮಾಜವಾದಿ ಚಿಂತನೆಗಳಿಂದ ಪ್ರೇರೇಪಿತರಾಗಿದ್ದ ಹೋರಾಟಗಾರ. ಸದಾ ಕ್ರಿಯಾಶೀಲರಾಗಿದ್ದ ಇವರು 'ಮಾನವ ಮಂಟಪ' ಸಂಘಟನೆಯ ಮೂಲಕ ಅನೇಕ ಅಂತರ್‌ಜಾತಿಯ ವಿವಾಹಗಳನ್ನು ನೆರವೇರಿಸಿದ್ದರು.

೬) **ಎಂ.ಆರ್. ನರಸಿಂಹ :** ಬೆಂಗಳೂರಿನ ಪ್ರಮುಖ ಧಾರ್ಮಿಕ ಸಾಹಿತ್ಯ ಲೇಖಕರಾದ ಎಂ.ಆರ್. ನರಸಿಂಹ ಅವರು ೨೩-೨-೦೭ರಂದು ವೈಕುಂಠವಾಸಿಗಳಾದರು. ಬಿ.ಎಂ.ಶ್ರೀ. ಪ್ರತಿಷ್ಠಾನದ ಸದಸ್ಯರಾಗಿ ನಿಕಟ ಸಂಪರ್ಕವಿಟ್ಟುಕೊಂಡಿದ್ದ ದಿವಂಗತರು ಮುಖ್ಯವಾಗಿ ಶ್ರೀ ವೈಷ್ಣವ ಸಾಹಿತ್ಯದಲ್ಲಿ ಪರಿಣತಿ ಹೊಂದಿ ಸುಮಾರು ೧೫ ಗ್ರಂಥಗಳನ್ನು ರಚಿಸಿದ್ದರು.

*ಮೇಲ್ಕಂಡ ಎಲ್ಲಾ ದಿವಂಗತರುಗಳಿಗೆ*
*ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಗೌರವಪೂರ್ವಕವಾಗಿ*
*ಶ್ರದ್ಧಾಂಜಲಿಯನ್ನು ಅರ್ಪಿಸುತ್ತಿದೆ.* □

# ಅಭಿನಂದನೆಗಳು

೧) 'ಕರ್ನಾಟಕ ರತ್ನ' ಪ್ರಶಸ್ತಿ, ಕರ್ನಾಟಕ ಸರ್ಕಾರ ಸಿದ್ಧಗಂಗಾಮಠಾಧೀಶರಾದ ಶ್ರೀ ಶ್ರೀ ಶತಾಯುಷಿ ಡಾ. ಶಿವಕುಮಾರಸ್ವಾಮಿ ಅವರಿಗೆ ನೀಡಿ ಸತ್ಕರಿಸಿದೆ.

೨) 'ಪಂಪ' ಪ್ರಶಸ್ತಿ : ನಾಡಿನ ಖ್ಯಾತ ವಿಮರ್ಶಕರಾದ ಡಾ. ಜಿ.ಎಸ್. ಆಮೂರ ಅವರಿಗೆ ೨೦೦೬ನೇ ಸಾಲಿನ ಪ್ರತಿಷ್ಠಿತ 'ಪಂಪ ಪ್ರಶಸ್ತಿ ಪ್ರಾಪ್ತವಾಗಿದೆ.

೩) ದಾನಚಿಂತಾಮಣಿ 'ಅತ್ತಿಮಬ್ಬೆ' ಪ್ರಶಸ್ತಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮಾಜಿ ಮಂತ್ರಿಗಳಾಗಿದ್ದ ಖ್ಯಾತ ಸಾಹಿತಿ ಶ್ರೀಮತಿ ಬಿ.ಟಿ. ಲಲಿತಾ ನಾಯಕ್ ಅವರಿಗೆ ೨೦೦೬ನೇ ಸಾಲಿನ ಪ್ರಶಸ್ತಿ ಪ್ರಾಪ್ತವಾಗಿದೆ.

೪) ಗೌರೀಶ ಕಾಯ್ಕಿಣಿ ಪ್ರತಿಷ್ಠಾನದ ಸಾಹಿತ್ಯಿಕ ಪ್ರಶಸ್ತಿ

೨೦೦೬ನೇ ಸಾಲಿನ ಗೌರವ ಪ್ರಶಸ್ತಿಗೆ ಭಾಜನರಾಗಿರುವ ಖ್ಯಾತ ಸಾಹಿತಿಗಳು i) ಶ್ರೀ ಎನ್. ನರಸಿಂಹಯ್ಯ (ಕಾದಂಬರಿ), ii) ಪ್ರೊ. ಸುಧಾಕರ (ಜಾನಪದ ತಜ್ಞ - ನಡೆದಾಡುವ ಗಾದೆಗಳ ಕೋಶವೆಂದು ಪ್ರಸಿದ್ಧರು), iii) ಶ್ರೀಮತಿ ಎ.ಪಿ. ಮಾಲತಿ (ಕಾದಂಬರಿ ಕ್ಷೇತ್ರದಲ್ಲಿ ಅನನ್ಯ ಸಾಧನೆ), iv) ಶ್ರೀಮತಿ ಎಚ್.ಎಸ್. ಮುಕ್ತಾಯಕ್ಕ (ಕವಿ ಹಾಗೂ ಉಪನ್ಯಾಸಕಿ), v) ಮಲ್ಲೇಪುರಂ ಜಿ. ವೆಂಕಟೇಶ (ಬಹುಮುಖ ಪ್ರತಿಭಾವಂತರು, ಸಂಸ್ಕೃತ ವಿದ್ವಾಂಸರು, ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದ ನಿರ್ದೇಶಕರು)

೫) ನೃಪತುಂಗ ಸಾಹಿತ್ಯ ಪ್ರಶಸ್ತಿ : ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ಸಾರಿಗೆ ಸಂಸ್ಥೆ ಸಹಯೋಗದೊಡನೆ ಸ್ಥಾಪಿಸಿರುವ ಈ ಪ್ರತಿಷ್ಠಿತ ಪ್ರಶಸ್ತಿಗೆ ನಾಡೋಜ ಡಾ. ದೇ. ಜವರೇಗೌಡರು ಭಾಜನರಾಗಿದ್ದಾರೆ.

೬) ಅ.ನ.ಕೃ. ನಿರ್ಮಾಣ ಪ್ರಶಸ್ತಿ : ೨೦೦೭ನೇ ಸಾಲಿನ ಪ್ರಶಸ್ತಿ ಡಾ. ಚೆನ್ನವೀರ ಕಣವಿಯವರಿಗೆ ಸಂದಿದೆ. ದಿನಾಂಕ ೧೩-೫-೦೭ ಪ್ರಶಸ್ತಿ ವಿತರಿಸಲಾಯಿತು.

೭) 'ಅನುಪಮ ಪ್ರಶಸ್ತಿ' ಖ್ಯಾತ ಕಾದಂಬರಿಕಾರರಾದ ಶ್ರೀಮತಿ ಆನಂದಿ ಸದಾಶಿವರಾವ್ ಅವರು ಈ ಪ್ರಶಸ್ತಿಗೆ ಆಯ್ಕೆಗೊಂಡಿದ್ದಾರೆ.

೮) ಎಸ್.ವಿ. ಪರಮೇಶ್ವರ ಭಟ್ಟರ ಸಂಸ್ಮರಣ ಪ್ರಶಸ್ತಿ : ಅಂಕಿತ ಪ್ರಕಾಶನದ ಶ್ರೀ ಪ್ರಕಾಶ್ ಕಂಬತ್ತಳ್ಳಿ ಅವರಿಗೆ ನೀಡಲಾಗಿದೆ.

೯) ಕೇಂದ್ರ ಸಾಹಿತ್ಯ ಅಕಾಡೆಮಿಯ ಅನುವಾದ ಪ್ರಶಸ್ತಿ : ಡಾ. ರಂ.ಶಾ. ಲೋಕಾಪುರ ಅವರು ಮರಾಠಿಯಿಂದ ಕನ್ನಡಕ್ಕೆ ಅನುವಾದಿಸಿರುವ 'ಜ್ಞಾನೇಶ್ವರಿ' ಕೃತಿಗೆ ೨೦೦೬ನೇ ಸಾಲಿನ ಭಾಷಾಂತರ ಪ್ರಶಸ್ತಿ ಸಂದಿದೆ.

೧೦) ಡಾ. ಬಿ. ಸರೋಜಾದೇವಿ ಪ್ರಶಸ್ತಿ : ಕನ್ನಡ ಸಾಹಿತ್ಯ ಪರಿಷತ್ತು ಡಾ. ಸರೋಜಾದೇವಿಯವರ ಪುತ್ರಿ ದಿವಂಗತ ಭುವನೇಶ್ವರಿ ಸ್ಮರಣಾರ್ಥ ನೀಡುವ ಈ ಪ್ರಶಸ್ತಿಗೆ ಖ್ಯಾತ ಲೇಖಕಿ ಡಾ. ಎಚ್. ಗಿರಿಜಮ್ಮ ಭಾಜನರಾಗಿದ್ದಾರೆ.

೧೧) ಚಾವುಂಡರಾಯ ಪ್ರಶಸ್ತಿ : ಖ್ಯಾತ ಲೇಖಕ ಹಾಗೂ ಸ್ವಾತಂತ್ರ್ಯ ಹೋರಟಗಾರರಾದ ಶ್ರೀ ಎಸ್.ಬಿ. ವಸಂತರಾಜಯ್ಯ ಅವರಿಗೆ ಲಭಿಸಿದೆ.

೧೨) ಸಿ.ಜಿ.ಕೆ. ಪ್ರಶಸ್ತಿ : ಸಾಹಿತಿ ಕೊಟಗಾನಹಳ್ಳಿ ರಾಮಯ್ಯ ಅವರಿಗೆ ಸಂದಿದೆ.

೧೩) ಸ್ವರ-ಲಯ ಪುರಸ್ಕಾರ : ಖ್ಯಾತ ಗಾಯಕಿ ಡಾ. ಗಂಗೂಬಾಯಿ ಹಾನಗಲ್ ಅವರಿಗೆ ೨೦೦೬ನೇ ಸಾಲಿನ ಪುರಸ್ಕಾರ ಲಭಿಸಿದೆ.

೧೪) 'ವೀಚಿ' ಸಾಹಿತ್ಯ ಪ್ರಶಸ್ತಿ ೨೦೦೬ನೇ ಸಾಲಿನ ಈ ಪ್ರಶಸ್ತಿಗೆ ಖ್ಯಾತ ಚಳವಳಿಗಾರ ಹಾಗೂ ಪತ್ರಕರ್ತ ಶ್ರೀ ಜಾಣಗೆರೆ ವೆಂಕಟರಾಮಯ್ಯ ಭಾಜನರಾಗಿದ್ದಾರೆ.

೧೫) ಕಲಾವಿದರುಗಳಿಗೆ ಸಲ್ಲುವ ಪ್ರತಿಷ್ಠಿತ ಪ್ರಶಸ್ತಿಗಳು

೨೦೦೬ನೇ ಸಾಲಿನ ಪ್ರಶಸ್ತಿ ಗಳಿಸಿರುವ ಖ್ಯಾತ ಕಲಾವಿದರುಗಳು: ಬಿ.ಕೆ. ಹುಬಳಿ (ವರ್ಣಚಿತ್ರ ವೆಂಕಟಪ್ಪ ಪ್ರಶಸ್ತಿ); ಶಿಲ್ಪಿ ಬಿ.ಎನ್. ಚನ್ನಪ್ಪಚಾರ್ಯ (ಜಕಣಾಚಾರಿ ಪ್ರಶಸ್ತಿ), ಈಶ್ವರಪ್ಪ ಗುರಪ್ಪ ಅಂಗಡಿ (ಜಾನಪದ ಶ್ರೀ), ಶ್ರೀ ವಿ. ರಾಮ್‌ರತ್ನಂ (ಕನಕಪುರಂದರ ಪ್ರಶಸ್ತಿ); ಶ್ರೀಮತಿ ಸಿ.ಕೆ. ತಾರಾ (ಶಿಶುನಾಳ ಪ್ರಶಸ್ತಿ),

೧೬) 'ಮಾಸ್ತಿ ಪ್ರಶಸ್ತಿ' : ೨೦೦೭ನೇ ಸಾಲಿನ ಈ ಪ್ರತಿಷ್ಠಿತ ಪ್ರಶಸ್ತಿ ಖ್ಯಾತ ಕವಿ, ವಿಮರ್ಶಕ, ನಿವೃತ್ತ ಪ್ರಾಧ್ಯಾಪಕ ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರಿಗೆ ಲಭಿಸಿದೆ.

**ಮೇಲ್ಕಂಡ ಎಲ್ಲಾ ಸನ್ಮಾನ್ಯರುಗಳಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಹಾರ್ದಿಕ ಅಭಿನಂದನೆಯೊಡನೆ ಶುಭಾಶಯ ಕೋರುತ್ತದೆ.**

❑

## ಹಾರ್ದಿಕ ಶುಭಾಶಯಗಳು



**ಪ್ರೊ॥ ಎಲ್.ಎಸ್. ಶೇಷಗಿರಿರಾವ್** ಅವರು ಉಡುಪಿಯಲ್ಲಿ ನಡೆಯುವ ೭೪ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಗೆ ನಿಯೋಜಿತರಾಗಿರುವುದು ಸಂತೋಷದ ಸಂಗತಿ. ಇವರು ನಮ್ಮ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾಗಿದ್ದರು. ಈಗ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ, ಮಾರ್ಗದರ್ಶನ ನೀಡುತ್ತಿದ್ದಾರೆ.

ಬಿ.ಎಂ.ಶ್ರೀ. ಪರಂಪರೆಯನ್ನು ಮುಂದುವರಿಸಿದ ಹಿರಿಯರು. ಕನ್ನಡದ ಒಳಿತಿಗಾಗಿ ದುಡಿದ ಮಹನೀಯರು. ಇವರಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಎಲ್ಲ ಸದಸ್ಯರ ಪರವಾಗಿ ತುಂಬು ಹೃದಯದ ಅಭಿನಂದನೆಗಳು.

*–ಸಂಪಾದಕ*

ಮುದ್ರಕರು : ಇಳಾ ಮುದ್ರಣ, ನಂ. ೩೬, ೪೦ ಅಡಿ ರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು – ೨೬. ✆ : ೨೬೭೫೫೭೧೯೯



# ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

## ಬಿ.ಎಂ.ಶ್ರೀ. ಕಲಾಭವನ

೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು - ೫೬೦ ೦೧೯
ದೂರವಾಣಿ : ೨೬೬೧೫೮೭೭

**ಸರ್ವಸದಸ್ಯರ ಸಭೆಯ ತಿಳುವಳಿಕೆ ಪತ್ರ,** ದಿನಾಂಕ : ೮-೯-೨೦೦೭

ಮಾನ್ಯರೇ,

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಇಪ್ಪತ್ತೆಂಟನೆಯ ಸರ್ವಸದಸ್ಯರ ಸಭೆಯು ದಿನಾಂಕ **೩೦-೯-೨೦೦೭ನೇ ಭಾನುವಾರ** ಬೆಳಗ್ಗೆ ೧೦-೩೦ಕ್ಕೆ ಅಧ್ಯಕ್ಷರಾದ ಪ್ರೊ|| ಚಿ. ಶ್ರೀನಿವಾಸರಾಜು ಅವರ ಅಧ್ಯಕ್ಷತೆಯಲ್ಲಿ ಎಂ.ವಿ.ಸೀ. ಸಭಾಂಗಣದಲ್ಲಿ ನಡೆಯಲು ತೀರ್ಮಾನವಾಗಿದೆ. ತಾವು ದಯವಿಟ್ಟು ಸಕಾಲಕ್ಕೆ ಆಗಮಿಸಿ ಸಭೆಯ ಕಾರ್ಯಕಲಾಪಗಳನ್ನು ನಡೆಸಿಕೊಡಬೇಕಾಗಿ ವಿನಂತಿ.

## ಕಾರ್ಯಸೂಚಿ

೧. ಸರ್ವಸದಸ್ಯರ ಸಭೆಯ ತಿಳುವಳಿಕೆ ಪತ್ರವನ್ನು ಸ್ಥಿರೀಕರಿಸುವುದು.
೨. ೨೦೦೬-೦೭ನೇ ಸಾಲಿನ ಆಡಳಿತ ವರದಿಯನ್ನು ಅಂಗೀಕರಿಸುವುದು.
೩. ೨೦೦೬-೨೦೦೭ನೇ ಸಾಲಿನ ಲೆಕ್ಕಪರಿಶೋಧಕರು ನೀಡಿರುವ ಆಯ-ವ್ಯಯ ಲೆಕ್ಕ ವಿವರಗಳನ್ನು ಅನುಮೋದಿಸುವುದು.
೪. ೨೦೦೭-೦೮ನೇ ಸಾಲಿನ ಅಂದಾಜು ಜಮಾ-ಖರ್ಚು ಪಟ್ಟಿಯನ್ನು ಅನುಮೋದಿಸುವುದು.
೫. ೨೦೦೭-೦೮ನೇ ಸಾಲಿಗೆ ಲೆಕ್ಕಪರಿಶೋಧಕರ ನೇಮಕ.
೬. ನಿಯಮಾನುಸಾರ ನಿವೃತ್ತರಾಗಲಿರುವ ಕಾರ್ಯಸಮಿತಿ ಸದಸ್ಯರ ಚುನಾವಣೆ.
೭. ಸದಸ್ಯರು ಕಳುಹಿಸಿರುವ ಸಲಹೆ ಸೂಚನೆಗಳು.
೮. ಇತರ ವಿಚಾರಗಳು (ಅಧ್ಯಕ್ಷರ ಒಪ್ಪಿಗೆಯಿಂದ).

ಕಾರ್ಯಸಮಿತಿಯ ಅಪ್ಪಣೆಯ ಮೇರೆಗೆ

| | | |
|---|---|---|
| **ಎಸ್.ಟಿ. ರಾಧಾಕೃಷ್ಣ** | **ಎಸ್.ವಿ. ಶ್ರೀನಿವಾಸರಾವ್** | **ಪ್ರೊ. ನಾ. ಗೀತಾಚಾರ್ಯ** |
| ಗೌರವ ಕೋಶಾಧಿಕಾರಿ | ವ್ಯವಸ್ಥಾಪಕ ಕಾರ್ಯದರ್ಶಿ | ಗೌರವ ಕಾರ್ಯದರ್ಶಿ |

**ವಿಶೇಷ ಸೂಚನೆ :**

೧. ಸದಸ್ಯತ್ವ ಬಾಕಿ ಇರುವವರು ಅವಧಿ ಮುಗಿದ ಮೂರು ತಿಂಗಳೊಳಗೆ ಪಾವತಿ ಮಾಡಿರಬೇಕು.
೨. ಅಗತ್ಯ ಸಂಖ್ಯೆಯ 'ಕೋರಂ' ಇಲ್ಲದಿದ್ದಲ್ಲಿ ಸಭೆಯು ಅರ್ಧ ಗಂಟೆಯ ನಂತರ ಆರಂಭವಾಗುತ್ತದೆ.
೩. ಸದಸ್ಯರು ಕಳುಹಿಸುವ ಸಲಹೆ ಸೂಚನೆಗಳು ಒಂದು ವಾರಕ್ಕೆ ಮುಂಚೆ ತಲುಪಬೇಕು.
೪. ವರದಿ ಮತ್ತು ಆಯ-ವ್ಯಯ ಲೆಕ್ಕಪತ್ರಗಳನ್ನು ಒಂದು ವಾರಕ್ಕೆ ಮುಂಚೆ ಪ್ರತಿಷ್ಠಾನದ ಕಾರ್ಯಾಲಯದಲ್ಲಿ ಪರಿಶೀಲಿಸಬಹುದು.
೫. ಬೆಳಗ್ಗೆ ೧೦-೦೦ ಗಂಟೆಗೆ ಉಪಹಾರವಿರುತ್ತದೆ.

ಮಾನ್ಯ ಸದಸ್ಯರೆ,

ತಮ್ಮ ಸಾಮಾನ್ಯ / ಆಜೀವ ಸದಸ್ಯತ್ವದ ಬಾಬ್ತು .................................. ರೂಪಾಯಿ ..................................................

ದಿನಾಂಕದಿಂದ ಬಾಕಿ ಇದೆ. ದಯವಿಟ್ಟು ಪಾವತಿ ಮಾಡಲು ಈ ಮೂಲಕ ಕೋರಿದೆ.

ಗೌ|| ಕಾರ್ಯದರ್ಶಿ

